


# ಜ್ಯೋತಿಷ ಮಿತ್ರ

## ಆನ್‌ಲೈನ್ ದಿನಪತ್ರಿಕೆ

www.jyothishamithra.com

**ಸಂಚಿಕೆ : 1250   03-02-2022   ಗುರುವಾರ**

ಪ್ಲವನಾಮ ಸಂವತ್ಸರ ಉತ್ತರಾಯಣ ಶಿಶಿರಋತು ಮಾಘಮಾಸ ಶುಕ್ಲಪಕ್ಷ

| ನಿತ್ಯ ಪಂಚಾಂಗ | ಸುಜ್ಞಾನ |
| --- | --- |
| ತಿಥಿ : ತದಿಗೆ (28:37)<br>ನಕ್ಷತ್ರ : ಶತಭಿಷಾ (16:33)<br>ರಾಹುಕಾಲ :<br>02:11 PM - 03:38 PM<br>ಗುಳಿಕಕಾಲ :<br>09:49 AM - 11:16 AM | ಒಂದು ಹಂತದವರೆಗೆ ನೋವು ಸಹಿಸಿದ ನಂತರ ಮನುಷ್ಯ ಮೌನವಾಗಿರುತ್ತಾನೆ. ಆಮೇಲೆ ಯಾರನ್ನೂ ದೂಷಿಸುವುದೂ ಇಲ್ಲ... ಯಾರಿಂದ ನಿರೀಕ್ಷಿಸುವುದೂ ಇಲ್ಲ... |



# ಸಂಪಾದಕೀಯ

ಆತ್ಮೀಯ ಸ್ನೇಹಿತರೇ,

ಬಹುಶಃ ಮೂರುವರೇ ವರ್ಷ ಆಗ್ತಾ ಬಂತು ನನ್ನ ಮತ್ತು ನಿಮ್ಮ ನಡುವೆ ಗೆಳೆತನ ಆರಂಭವಾಗಿ. 2018ರ ಜೂನ್ ತಿಂಗಳಲ್ಲಿ ಜ್ಯೋತಿಷ ಮಿತ್ರ ಮಾಸಪತ್ರಿಕೆಯನ್ನು ದಿನಪತ್ರಿಕೆಯನ್ನಾಗಿ ಬದಲಾಯಿಸಲಾಯಿತು. ಅಂದಿನಿಂದ ನಾನು ನಿತ್ಯ ಪಂಚಾಂಗ, ಜ್ಯೋತಿಷ - ವಾಸ್ತು - ಸಂಖ್ಯಾಶಾಸ್ತ್ರ, ಆಧ್ಯಾತ್ಮ, ಯೋಗ, ಔಷಧ ರಹಿತ ಚಿಕಿತ್ಸೆ, ಮುದ್ರಾ ವಿಜ್ಞಾನಕ್ಕೆ ಸಂಬಂಧಿಸಿದ ಹಲವು ಲೇಖನಗಳನ್ನು ಹಂಚುತ್ತಾ ಬಂದಿದ್ದೇನೆ. ಆದರೆ ನಾನು ಹಂಚಿದ ಎಲ್ಲಾ ಲೇಖನಗಳು ಚೆನ್ನಾಗಿದೆ ಎಂದು ಎಂದು ಖಂಡಿತವಾಗಿ ಹೇಳ್ತಾ ಇಲ್ಲಾ. ನೀವು ಸಲಹೆ- ಸಹಕಾರದೊಂದಿಗೆ ಪ್ರತಿ ಬಾರಿ

ಪ್ರೋತ್ಸಾಹಿದ ಕಾರಣದಿಂದಾಗಿಯೇ ಹೊಸ ಹೊಸ ಬದಲಾವಣೆಯೊಂದಿಗೆ ಪತ್ರಿಕೆ ಪ್ರಕಟವಾಗುತ್ತಿದೆ.

ಸಾಧಿಸಿದ್ದು ಅತ್ಯಲ್ಪ, ಸಾಧಿಸದಬೇಕಾದದ್ದು ಅಗಾಧ. “ಜ್ಯೋತಿಷ ಮಿತ್ರ ದಿನಪತ್ರಿಕೆ”ಯು 1250ನೇ ಸಂಚಿಕೆಯನ್ನು ಪೂರೈಸುತ್ತಿರುವ ಈ ಸಂದರ್ಭದಲ್ಲಿ ನಮ್ಮನ್ನು ಈ ವರೆಗೂ ಆಶೀರ್ವದಿಸಿ ಪ್ರೋತ್ಸಾಹಿಸಿದ ನಮ್ಮ ಓದುಗ ಮಿತ್ರರು, ವಿದ್ಯಾರ್ಥಿಗಳು, ಹಿತೈಸಿಗಳನ್ನೆಲ್ಲಾ ನೆನಪಿಸಿಕೊಳ್ಳುತ್ತಿದ್ದೇನೆ. ನೀವಿಲ್ಲದಿದ್ದರೆ ಈ ಪಯಣವು ಖಂಡಿತಾ ಅಪೂರ್ಣವಾಗುತ್ತಿತ್ತು.

ಸಸ್ನೇಹ ಪ್ರಣಾಮಗಳೊಂದಿಗೆ

ಶ್ರೀಷ ಎಸ್.(ಸಂಪಾದಕರು)

ಮರ್ಯಾದಾಪುರುಷೋತ್ತಮ

# ಶ್ರೀರಾಮಚಂದ್ರನ ಜಾತಕ



ಮಹಾವಿಷ್ಣುವಿನ ಏಳನೇ ಅವತಾರವಾಗಿ ರಘುವಂಶದಲ್ಲಿ ಜನಿಸಿದವನು ಶ್ರೀರಾಮ. ಮನುಕುಲಕ್ಕೆ ಜೀವನದ ಪಾಠ, ಧರ್ಮ-ಕರ್ಮಗಳ ನಿರ್ವಹಣೆ ಹಾಗೂ ಸತ್ಯ ಸಂಗತಿಯ ಮೂಲಕ ನಡೆಸುವ ಜೀವನ ಕ್ರಮವನ್ನು ತಿಳಿಸಿಕೊಟ್ಟನು. ಭಾರತ ಮಾತ್ರವಲ್ಲದೇ ದಕ್ಷಿಣ ಏಷಿಯಾ ಹಾಗೂ ಆಗ್ನೇಯ ಏಷಿಯಾದ ಧಾರ್ಮಿಕ ಗ್ರಂಥಗಳಲ್ಲೂ ರಾಮನ ಕುರಿತಾದ ಉಲ್ಲೇಖವನ್ನು ಕಾಣುತ್ತೇವೆ. ಕೃಷ್ಣನಂತೆಯೇ ರಾಮನು ಕೂಡಾ ವಿಷ್ಣುವಿನ ಅವತಾರಗಳಲ್ಲಿ ಒಬ್ಬನು.

| | | | |
|---|---|---|---|
| ಶುಕ್ರ | ರವಿ | ಬುಧ | ಕೇತು |
| | ಗ್ರಹ ಕುಂಡಲಿ | | ಲಗ್ನ ಚಂದ್ರ ಗುರು |
| ಕುಜ | | | |
| ರಾಹು | | ಶನಿ | |

ಕರ್ಕಾಟಕ ರಾಶಿ –ಕರ್ಕಾಟಕ ಲಗ್ನದಲ್ಲಿ ಜನನ. ಗುರು, ಶನಿ, ಕುಜ, ಶುಕ್ರ, ರವಿ ಉಚ್ಚರಾಗಿರುವರು. ಲಗ್ನದಲ್ಲಿ ಪ್ರಬಲ ಗಜಕೇಸರಿ ಯೋಗವಿದೆ. “ಲಗ್ನೇಶೇ ಲಗ್ನಗೇ ದೇಹಸುಖಬಾಕ್....” ಎನ್ನುವಂತೆ ಲಗ್ನಾಧಿಪತಿಯು ಲಗ್ನದಲ್ಲಿದ್ದರೆ ಆರೋಗ್ಯವಂತನೂ, ಸ್ವಪ್ರಯತ್ನದಲ್ಲಿ ಜೀವನದಿಂದ ಜೀವನದಲ್ಲಿ ಉನ್ನತಿಯನ್ನು ಹೊಂದುವವನೂ ಆಗುವನು. ಚಂದ್ರನು

ಶುಭಗ್ರಹನಾಗಿರುವುದರಿಂದ ಸುಂದರನೂ, ರೂಪವಂತನೂ ಆಗುವನು. ಲಗ್ನದಲ್ಲಿ ಗುರುವಿದ್ದಾಗ "ಶೋಭಾವಾನ್ ಸುಕೃತೀ ..." ಎಂಬಂತೆ ನ್ಯಾಯ, ಧರ್ಮ,ಸತ್ಯದಲ್ಲಿ ಶ್ರದ್ಧೆಯುಳ್ಳವನೂ; ಆಸ್ತಿಕನೂ ಆಗುವನು. ದೈವಾನುಗ್ರಹವಿರುತ್ತದೆ. ಧಾರ್ಮಿಕ ಮುಖಂಡ ಅಥವಾ ಪಂಡಿತನಾಗಬಹುದು ಎಂದು ಜ್ಯೋತಿಷ ಶಾಸ್ತ್ರದಲ್ಲಿದೆ.

ದಾನ, ಉಪಾಸನ, ಸೌಶೀಲ್ಯ, ಸತ್ಯ, ಧರ್ಮ ಮೊದಲಾದ ಎಲ್ಲಾ ಗುಣಗಳೂ ಲಗ್ನ ಮತ್ತು ಭಾಗ್ಯಭಾವದಿಂದ ನಿರ್ಣಯವಾಗುತ್ತದೆ. ಭಾಗ್ಯದಲ್ಲಿ ಉಚ್ಚ ಶುಕ್ರ,ಭಾಗ್ಯಭಾವಕ್ಕೆ ಉಚ್ಚ ಗುರುವಿನ ದೃಷ್ಟಿ. ಲಗ್ನದಲ್ಲಿ ಭಾಗ್ಯಾಧಿಪತಿಗೆ ಲಗ್ನಾಧಿಪತಿಯೊಡನೆ ಗಜಕೇಸರಿಯೋಗ, ಭಾಗ್ಯಾಧಿಪತಿಯ ಉಚ್ಚಸ್ಥಿತಿ ಶ್ರೀರಾಮಚಂದ್ರನ ಮರ್ಯಾದಾಪುರುಷೋತ್ತಮತ್ವಕ್ಕೆ ಸಾಕ್ಷಿಯಾಗಿವೆ.

ಜ್ಞಾನಕಾರಕನಾದ ಗುರುವಿನ ಉಚ್ಚಸ್ಥಿತಿ, ಜ್ಞಾನಸ್ಥಾನದ ಶುಕ್ರನ ಉಚ್ಚಸ್ಥಿತಿಯಿಂದ ಶ್ರೀರಾಮಚಂದ್ರನ ಲೋಕೋತ್ತರ ಗುಣಗಳು ಪ್ರಕಟವಾಗಿವೆ. ಜೊತೆಗೆ ಪಿತೃಕಾರಕ ರವಿಯೂ ಉಚ್ಚಂಗತನಾಗಿರುವುದು ಹಾಗೂ ಆತನಿಗೆ ಶುಭಕರ್ತರೀ ಯೋಗ ಉಂಟಾಗಿದ್ದರಿಂದ ತಂದೆಯಾದ ದಶರಥನ ಅಮಿತ ಯಶಸ್ಸು ಹಾಗೂ ಅಪಾರ ಸಂಪತ್ತು ವ್ಯಕ್ತವಾಗುತ್ತದೆ.




ಇದು ಮಕರ ಲಗ್ನದ ಸ್ತ್ರೀ ಜಾತಕ. ಲಗ್ನಾಧಿಪತಿ ಶನಿ ದಶಮದಲ್ಲಿ ಉಚ್ಚನಾಗಿ ಶಶಯೋಗದಲ್ಲಿರುವನು. ಪಿತೃ ಸ್ಥಾನವಾದ ನವಮದಲ್ಲಿ ಚಂದ್ರ-ಕುಜರಿದ್ದು ಪಾಪಗ್ರಹರಾದ ರಾಹು-ಮಾಂದಿ ದೃಷ್ಟರಾಗಿರುವರು. ಪಿತೃಸ್ಥಾನಾಧಿಪತಿ ಬುಧ ಮತ್ತು ಪಿತೃಕಾರಕ ರವಿ ವ್ಯಯಭಾವದಲ್ಲಿದ್ದು ಕುಜ-ಶನಿಯಿಂದ ದೃಷ್ಟರಾಗಿರುವರು.

| | | | |
|---|---|---|---|
| ಮಾಂದಿ | | ರಾಹು | |
| | 28-12-1983<br>9.20 AM<br>ಗ್ರಹ ಕುಂಡಲಿ | | |
| ಲಗ್ನ | | | |
| ಗುರು ರವಿ<br>ಬುಧ | ಶುಕ್ರ<br>ಕೇತು | ಶನಿ | ಚಂದ್ರ<br>ಕುಜ |

ಜನ್ಮರಾಶಿ ಕನ್ಯಾದಿಂದ ನವಮದಲ್ಲಿ ರಾಹುವಿರುವನು. ನವಮಾಧಿಪತಿ ಶುಕ್ರನು ತೃತೀಯ ಭಾವದಲ್ಲಿ ಕೇತುಯುತನಾಗಿರುವನು.

ನವಾಂಶ ಕುಂಡಲಿಯಲ್ಲಿ ನವಮಾಧಿಪತಿ ಶನಿಯು ನೀಚನಾಗಿ ಕುಜನಿಂದ ದೃಷ್ಟನಾಗಿರುವನು. ಚಂದ್ರನಿಂದ ನವಮಾಧಿಪತಿ ಶುಕ್ರನು ಲಾಭದಲ್ಲಿದ್ದರೂ ರಾಹುಯುಕ್ತನಾಗಿರುವನು.

|  | ಶನಿ ಗುರು |  | ಲಗ್ನ |
| --- | --- | --- | --- |
|  | ನವಾಂಶ ಕುಂಡಲಿ |  | ರಾಹು<br>ಶುಕ್ರ |
| ಕೇತು |  |  | ರವಿ |
|  |  |  | ಚಂದ್ರ<br>ಕುಜ ಬುಧ<br>ಮಾಂದಿ |

ಹೀಗಾಗಿ ಈಕೆ ತನ್ನ ರಾಹುದಶಾ ಶನಿಭುಕ್ತಿಯಲ್ಲಿ ತಂದೆಯನ್ನು ಬಾಲ್ಯದಲ್ಲಿಯೇ ಕಳೆದುಕೊಳ್ಳುವಂತಾಯಿತು. ಪಿತೃಸ್ಥಾನದಲ್ಲಿ ಕುಜನಿದ್ದು ಮಾಂದಿ-ರಾಹು ವೀಕ್ಷಿಸುತ್ತಿರುವುದು. ಪಿತೃಸ್ಥಾನಾಧಿಪತಿ ಹಾಗೂ ಪಿತೃಕಾರಕ ವ್ಯಯಭಾವಸ್ಥಿತಿ ಹಾಗೂ ಪಾಪದೃಷ್ಟಿಯಿಂದಾಗಿ ಈ ಜಾತಕಳು ಪಿತೃಸುಖದಿಂದ ವಂಚಿತಳಾದಳು. ತಂದೆಯ ಆರ್ಥಿಕ ಪರಿಸ್ಥಿತಿಯೂ

ಚೆನ್ನಾಗಿರಲಿಲ್ಲ.




ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ

ಗೌರವ ಸಂಪಾದಕರು : ಜೀವನ್ ಉಳ್ಳಾಲ್
ಸಂಪಾದಕರು : ಶ್ರೀಷ ಎಸ್.
ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.



PH : 9986671473 / 9535283535
jmonline@gmail.com www.jyothishamithra.com